ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ವೈದ್ಯಕೀಯ ವಿಜ್ಞಾನ ಸಂಸ್ಥೆಗಳಲ್ಲಿ ನೇರ ನೇಮಕಾತಿಯ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

40 (19) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2014 ರಿಂದ 2020ರ ಜನವರಿ ಅವಧಿಯೊಳಗೆ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಿಗೆ ನೇರ ನೇಮಕಾತಿ ಹೊಂದಿರುವ ಪ್ರಾಧ್ಯಾಪಕರುಗಳ, ಸಹ ಪ್ರಾಧ್ಯಾಪಕರುಗಳ, ಸಹಾಯಕ ಪ್ರಾಧ್ಯಾಪಕರುಗಳ ಕಾಲೇಜುವಾರು ಮಾಹಿತಿ ನೀಡುವುದು;

(ಆ) ಸದರಿ ನೇರ ನೇಮಕಾತಿ ಹೊಂದಿದ ಬೋಧಕರುಗಳು ಹಾಜರುಪಡಿಸಿದ ವಿದ್ಯಾರ್ಹತೆ ಕುರಿತು ಅವರು ಅಧ್ಯಯನ ನಡೆಸಿದ ಸಂಸ್ಥೆಗಳಿಂದ ದೃಢೀಕರಿಸಿಕೊಳ್ಳಲಾಗಿದೆಯೇ;

(ಇ) ಸದರಿ ಅಭ್ಯರ್ಥಿಗಳು ಮೀಸಲಾತಿ ಹಕ್ಕು ಪ್ರತಿಪಾದಿಸಿ ಹಾಜರುಪಡಿಸಿದ ದಾಖಲಾತಿಗಳನ್ನು ಸೂಕ್ತ ಪ್ರಾಧಿಕಾರದಿಂದ ಪರಿಶೀಲಿಸಿ ದೃಢೀಕರಿಸಿಕೊಳ್ಳಲಾಗಿದೆಯೇ;

(ಈ) ಆಯ್ಕೆಯಾದ ಬೋಧಕರನ್ನು ಪೊಲೀಸ್ ಪರಿಶೀಲನೆಗೆ ಒಳಪಡಿಸಲಾಗಿದೆಯೇ;

(ಉ) ಅಭ್ಯರ್ಥಿಗಳು ಸೇವೆಗೆ ಸೇರ್ಪಡೆಗೊಳ್ಳುವ ಸಂದರ್ಭದಲ್ಲಿ ಹಾಜರುಪಡಿಸಿದ ಸೇವಾ ಅನುಭವದ ಪ್ರಮಾಣ ಪತ್ರಗಳನ್ನು ಆಯಾ ಮೂಲ ಸಂಸ್ಥೆಯಿಂದ ಖಚಿತಪಡಿಸಿಕೊಳ್ಳಲಾಗಿದೆಯೇ;

(ಊ) ಸುಳ್ಳು ಅನುಭವ ಪತ್ರ ನೀಡಿ ಸೇವೆಗೆ ಸೇರ್ಪಡೆಗೊಂಡ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿವೆಯೇ;

(ಋ) ಸುಳ್ಳು ಅನುಭವ ಪತ್ರ ನೀಡಿ ಸೇವೆಗೆ ಸೇರ್ಪಡೆಗೊಂಡ ಬೋಧಕರ ವಿರುದ್ಧ ಕ್ರಮಕೈಗೊಂಡ ಪ್ರಕರಣಗಳು ಎಷ್ಟು ಮತ್ತು ಯಾವ ಶಿಸ್ತು ಕ್ರಮ ಜರುಗಿಸಲಾಗಿದೆ? (ಕಾಲೇಜುವಾರು ಮಾಹಿತಿ ನೀಡುವುದು)